<u>ಕರ್ನಾಟಕ ವಿಧಾನ ಪರಿಷತ್ತು</u>

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಆರ್.ಧರ್ಮಸೇನ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1066** |
| ಉತ್ತರಿಸಬೇಕಾದ ದಿನಾಂಕ | : | 22.12.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜೀವ್ ಗಾಂಧಿ ವಸತಿ ನಿಗಮವನ್ನು ಯಾವ ಉದ್ದೇಶದಿಂದ ಸ್ಥಾಪನೆ ಮಾಡಲಾಗಿದೆ; ಇದರ ಧ್ಯೇಯೋದ್ದೇಶಗಳೇನು; | ಸರ್ಕಾರವು ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತವನ್ನು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ವಸತಿರಹಿತರು ಮತ್ತು ನಿವೇಶನರಹಿತರಿಗೆ ವಸತಿ ಹಾಗೂ ನಿವೇಶನ ಸೌಲಭ್ಯ ಕಲ್ಪಿಸಲು ಸ್ಥಾಪಿಸಿರುತ್ತದೆ.<br><br>ಇದರ ಧ್ಯೇಯೋದ್ದೇಶಗಳು:<br>➤ ರಾಜ್ಯಾದ್ಯಂತ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದವರಿಗೆ ರಾಜ್ಯ ಮತ್ತು ಕೇಂದ್ರ ಸರ್ಕಾರದಿಂದ ಪ್ರಾಯೋಜಿಸಲ್ಪಟ್ಟ ವಸತಿ ಯೋಜನೆಗಳಡಿ ವಸತಿ ಸೌಕರ್ಯವನ್ನು ಒದಗಿಸುವುದು.<br>➤ ವಿದ್ಯುನ್ಮಾನ ತಂತ್ರಜ್ಞಾನದ ಬಳಕೆಯಿಂದ ಹಣ ವರ್ಗಾವಣೆ ಪದ್ಧತಿ (Electronic Fund Transfer System) ಮೂಲಕ ಫಲಾನುಭವಿಗಳ ಖಾತೆಗೆ ನೇರ ಅನುದಾನ ಬಿಡುಗಡೆ ಮಾಡುವುದು.<br>➤ ಅಗ್ಗದ ದರದಲ್ಲಿನ ಕಟ್ಟಡ ಸಾಮಗ್ರಿಗಳನ್ನು ಸಂಘಟಿತ ಉತ್ಪಾದನೆಯಿಂದ ಅಥವಾ ಬೃಹತ್ ಸಂಗ್ರಹಣೆ ಮೂಲಕ ಪಡೆಯುವುದು.<br>➤ ಆಡಳಿತದಲ್ಲಿ ದಕ್ಷತೆ ಮತ್ತು ಪಾರದರ್ಶಕತೆಯನ್ನು ಅನುಷ್ಠಾನಗೊಳಿಸುವುದು.<br>➤ ಸ್ವ ಸಹಾಯದ ಮೂಲಕ ಜನರಿಗೆ ಕಟ್ಟಡ ಸಾಮಗ್ರಿಗಳು, ವಿನ್ಯಾಸ ಮತ್ತು ತಂತ್ರಜ್ಞಾನಗಳನ್ನು ಆಯ್ಕೆ ಮಾಡಲು ಅವಕಾಶ ನೀಡುವುದು.<br>➤ ಗ್ರಾಮ ಪಂಚಾಯಿತಿ ಹಾಗೂ ಸರ್ಕಾರೇತರ ಸಂಸ್ಥೆಗಳೊಂದಿಗೆ ಪಾಲುಗಾರಿಕೆ |

<table>
<tr>
<td>(ಆ)</td>
<td>ಈ ನಿಗಮಕ್ಕೆ ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ಕಳೆದ ಮೂರು ವರ್ಷಗಳಲ್ಲಿ ಅನುದಾನ ಎಷ್ಟು ಬಿಡುಗಡೆಯಾಗಿರುವ ಆ ಪೈಕಿ ಖರ್ಚಾಗಿರುವ ಹಣ ಎಷ್ಟು; ವಸತಿ ಹಂಚಿಕೆಗೆ ಇರುವ ಮಾನದಂಡಗಳೇನು;</td>
<td>ಕಳೆದ 3 ವರ್ಷಗಳಲ್ಲಿ ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತಕ್ಕೆ ವಿವಿಧ ವಸತಿ ಯೋಜನೆಗಳಡಿ ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ರೂ.10,361.40 ಕೋಟಿಗಳ ಅನುದಾನ ಬಿಡುಗಡೆ ಮಾಡಲಾಗಿದ್ದು, ಈ ಪೈಕಿ ರೂ. 9,739.03 ಕೋಟಿಗಳನ್ನು ಖರ್ಚು ಮಾಡಲಾಗಿದೆ. ವರ್ಷಾವಾರು ವಿವರ ಈ ಕೆಳಗಿನಂತಿದೆ :-<br><br>(ರೂ.ಕೋಟಿಗಳಲ್ಲಿ)
<table>
<tr><th>ವರ್ಷ</th><th>ಬಿಡುಗಡೆಯಾದ ಮೊತ್ತ</th><th>ಖರ್ಚು ಮಾಡಲಾದ ಮೊತ್ತ</th></tr>
<tr><td>2018-19</td><td>5194.07</td><td>5300.94<br>(ಪ್ರಾರಂಭಿಕ ಶಿಲ್ಕನ್ನು ಒಳಗೊಂಡಂತೆ)</td></tr>
<tr><td>2019-20</td><td>2572.10</td><td>2392.00</td></tr>
<tr><td>2020-21</td><td>2595.23</td><td>2046.09</td></tr>
<tr><td>ಒಟ್ಟು</td><td>10361.40</td><td>9739.03</td></tr>
</table>
<br>ನಿವೇಶನ ಹಾಗೂ ಮೂಲಭೂತ ಸೌಕರ್ಯ ಯೋಜನೆಗಳಡಿ ಕಳೆದ ಮೂರು ವರ್ಷಗಳಲ್ಲಿ ಒಟ್ಟು ರೂ.73.21 ಕೋಟಿಗಳನ್ನು ಖರ್ಚು ಮಾಡಲಾಗಿದೆ.<br><br>ಗ್ರಾಮೀಣ ವಸತಿ ಯೋಜನೆಗಳಡಿ ವಸತಿ ಸೌಕರ್ಯ ಪಡೆಯಲು ನಿಗದಿಪಡಿಸಿರುವ ಮಾನದಂಡ ವಿವರ ಅನುಬಂಧದಲ್ಲಿ ಒದಗಿಸಲಾಗಿದೆ.</td>
</tr>
<tr>
<td>(ಇ)</td>
<td>ಈ ನಿಗಮದ ವತಿಯಿಂದ ಯಾರು ಯಾರಿಗೆ ವಸತಿಗಳನ್ನು ನೀಡಲಾಗಿದೆ; ಯಾವ ಯಾವ ವರ್ಗದವರಿಗೆ ನೀಡಲಾಗಿದೆ;</td>
<td>ವಸತಿ ನಿಗಮವು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ಹಾಗೂ ಬಡತನ ರೇಖೆಗಿಂತ ಕೆಳಗಿರುವ ಎಲ್ಲಾ ವರ್ಗದ ಅಂದರೆ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಸಾಮಾನ್ಯ ಹಾಗೂ ಅಲ್ಪಸಂಖ್ಯಾತ ವರ್ಗದ ವಸತಿರಹಿತರಿಗೆ ವಸತಿ ಸೌಕರ್ಯವನ್ನು ಒದಗಿಸಲಾಗುತ್ತಿದೆ.</td>
</tr>
</table>

| | | |
|---|---|---|
| (ಈ) | ವಸತಿ ಹಂಚಿಕೆ ಮಾಡುವಾಗ ಭ್ರಷ್ಟಾಚಾರ ನಡೆಯುತ್ತಿದೆ ಎಂಬ ಆರೋಪಗಳಿದ್ದು, ಇದನ್ನು ತಪ್ಪಿಸಿ ನಿಜವಾದ ಫಲಾನುಭವಿಗಳಿಗೆ ಹಂಚಿಕೆ ಮಾಡಲು ಸರ್ಕಾರ ಯಾವ ರೀತಿ ಕ್ರಮ ಕೈಗೊಳ್ಳುತ್ತದೆ ? | ಸರ್ಕಾರವು ಆಯವ್ಯಯದಲ್ಲಿ ಒದಗಿಸುವ ಅನುದಾನಕ್ಕೆ ಅನುಗುಣವಾಗಿ ಆಯಾ ವರ್ಷ ಮನೆಗಳ ಗುರಿಯನ್ನು ನಿಗದಿಪಡಿಸಿ, ಗ್ರಾಮೀಣ ಪ್ರದೇಶದಲ್ಲಿ ಅರ್ಹ ಫಲಾನುಭವಿಗಳನ್ನು ಗ್ರಾಮಸಭಾ ಮೂಲಕ ಹಾಗೂ ನಗರ ಪ್ರದೇಶದಲ್ಲಿ ನಗರ ಆಶ್ರಯ ಸಮಿತಿ ಸಭೆ ಮೂಲಕ ಆಯ್ಕೆ ಮಾಡಿ ವಸತಿ ಸೌಕರ್ಯ ಒದಗಿಸಲಾಗುತ್ತಿದೆ.<br><br>ಸರ್ಕಾರದ ಆದೇಶ ಸಂಖ್ಯೆ : ವಇ 04 ಹೆಚ್ಎವೈ 2018, ದಿನಾಂಕ: 31.01.2019ರಲ್ಲಿ ವಿವಿಧ ವಸತಿ ಹಾಗೂ ನಿವೇಶನ ಯೋಜನೆಯಡಿಯಲ್ಲಿ ಆಯ್ಕೆಗೊಂಡ ಫಲಾನುಭವಿಗಳು ಅನರ್ಹರೆಂದು ಕಂಡು ಬಂದಲ್ಲಿ, ಈ ಕೆಳಕಂಡಂತೆ ಕ್ರಮ ವಹಿಸತಕ್ಕದ್ದೆಂದು ಆದೇಶಿಸಲಾಗಿದೆ.<br><br>1. ಗ್ರಾಮೀಣ ವಸತಿ/ನಿವೇಶನ ಯೋಜನೆಗಳಡಿ ಆಯ್ಕೆಯಾದ ಫಲಾನುಭವಿ ಅನರ್ಹರಿರುವ ಬಗ್ಗೆ ಅಥವಾ ನಿಗದಿಪಡಿಸಿದ ಅರ್ಹತೆ ಹೊಂದಿಲ್ಲದಿರುವ ಬಗ್ಗೆ ಯಾವುದೇ ಸಾರ್ವಜನಿಕರಿಂದ/ಗಣ್ಯ ವ್ಯಕ್ತಿಗಳಿಂದ ದೂರು ಬಂದಲ್ಲಿ, ಸಂಬಂಧಪಟ್ಟ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು ಅಥವಾ ತಾಲ್ಲೂಕು ಪಂಚಾಯಿತಿ ಕಾರ್ಯನಿರ್ವಾಹಣಾಧಿಕಾರಿಗಳು ಅಧಿಕೃತ ದಾಖಲೆಗಳ ಆಧಾರದ ಮೇಲೆ ದೂರನ್ನು ಪರಿಶೀಲಿಸಿ (ಅಗತ್ಯವಿದ್ದಲ್ಲಿ ಸ್ಥಳ ತನಿಖೆ ಮಾಡಿ) ಫಲಾನುಭವಿಯು ನಿಗದಿಪಡಿಸಿದ ಅರ್ಹತೆಯನ್ನು ಹೊಂದಿಲ್ಲದಿರುವುದು ಕಂಡು ಬಂದಲ್ಲಿ ಅಂತಹ ಫಲಾನುಭವಿಯನ್ನು ರದ್ದುಪಡಿಸಲು ದೂರು ಸಲ್ಲಿಕೆಯಾದ ಮೂವತ್ತು ದಿನಗಳ ಒಳಗಾಗಿ ಕ್ರಮ ವಹಿಸುವುದು.<br><br>2. ವಸತಿ / ನಿವೇಶನಕ್ಕೆ ಸಂಬಂಧಪಟ್ಟಂತೆ ನೋಂದಣಿಯನ್ನು ರದ್ದುಪಡಿಸುವ ಕುರಿತಂತೆ ಕ್ರಮವಹಿಸಲು ಹಾಗೂ ಒಂದು ವೇಳೆ ಅನುದಾನ ಬಿಡುಗಡೆಗೊಂಡಿದ್ದಲ್ಲಿ ವಾರ್ಷಿಕ ಶೇಕಡ 11 ರಷ್ಟು ಬಡ್ಡಿ ಸಮೇತ ಒಂದೇ ಕಂತಿನಲ್ಲಿ ವಸೂಲಿ ಮಾಡಿ, ಸರ್ಕಾರಕ್ಕೆ ಜಮೆ ಮಾಡಲು ಕ್ರಮವಹಿಸುವುದು ಮತ್ತು ಗ್ರಾಮ ಪಂಚಾಯಿತಿಯಲ್ಲಿ ಅಂತಹ ಅನರ್ಹರನ್ನು ಆಯ್ಕೆಗೊಳಿಸಿದವರ ಮೇಲೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಕಾಯಿದೆಯ ಪ್ರಕಾರ ಶಿಸ್ತು ಕ್ರಮ ಕೈಗೊಳ್ಳಲು ಕ್ರಮವಹಿಸುವುದು. ಈ ಕ್ರಮವನ್ನು ಫಲಾನುಭವಿಯನ್ನು ರದ್ದುಪಡಿಸಿದ ದಿನದಿಂದ ಮೂವತ್ತು ದಿನಗಳ ಒಳಗಾಗಿ ಕೈಗೊಳ್ಳುವುದು. |

| | | |
|---|---|---|
| | | ವಿವಿಧ ಯೋಜನೆಗಳಡಿ ಅನುದಾನ ದುರ್ಬಳಕೆಯನ್ನು ತಡೆಹಿಡಿಯುವ ಉದ್ದೇಶದಿಂದ ಸರ್ಕಾರದ ಆದೇಶ ಸಂಖ್ಯೆ: ವಇ 154 ಹೆಚ್ಎಹೆಚ್ 2019, ದಿನಾಂಕ: 16.11.2019ರಲ್ಲಿ ಆದೇಶಿಸಿರುವಂತೆ ಮನೆಗಳ ಪ್ರಗತಿಯನ್ನು ಜಿಯೋ ಆಧಾರಿತ "ವಿಜಿಲ್ ಆಪ್" ಮೂಲಕ ಜಿಲ್ಲಾಧಿಕಾರಿಗಳು / ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮೂಲಕ ಪುನರ್ ಪರಿಶೀಲಿಸಿ, ಅರ್ಹ ಫಲಾನುಭವಿಗಳಿಗೆ ಅನುದಾನ ಬಿಡುಗಡೆಗೆ ಕ್ರಮವಹಿಸಲಾಗುತ್ತಿದೆ. ಮುಂದುವರೆದು, ಸರ್ಕಾರದ ಆದೇಶ ಸಂಖ್ಯೆ: ವಇ 75 ಹೆಚ್ಎಹೆಚ್ 2021, ದಿನಾಂಕ: 07.09.2021ರಲ್ಲಿ ವಿಜಿಲ್ ಆಪ್ ಮೂಲಕ ಮನೆಗಳ ಪ್ರಗತಿಯನ್ನು ಪ್ರತ್ಯೇಕವಾಗಿ ಪರಿಶೀಲಿಸುವುದನ್ನು ಮತ್ತಷ್ಟು ಸರಳೀಕರಿಸಿ, In-House ಮೂಲಕ ಅಭಿವೃದ್ಧಿಪಡಿಸಿರುವ "Indira-Vigil" ವೆಬ್ ಆ್ಯಪ್ ಮೂಲಕ ಪರಿಶೀಲಿಸಿದ ನಂತರ, ಅನುದಾನ ಬಿಡುಗಡೆಗೆ ಅನುಮತಿ ನೀಡಲಾಗಿದೆ. ಹೀಗೆ ದೃಢೀಕರಿಸಿದ ಅರ್ಹ ಫಲಾನುಭವಿಗಳಿಗೆ ಮಾತ್ರ ಅನುದಾನ ಬಿಡುಗಡೆ ಮಾಡಲಾಗುತ್ತಿದೆ.<br><br>ಅರ್ಹ ಫಲಾನುಭವಿಗಳಿಗೆ ವಸತಿ ಸೌಕರ್ಯ ಕಲ್ಪಿಸುವ ನಿಟ್ಟಿನಲ್ಲಿ ಮೇಲ್ಕಂಡ ಎಲ್ಲಾ ರೀತಿಯ ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗುತ್ತಿದ್ದು, ಅನರ್ಹ ಫಲಾನುಭವಿಗಳ ಆಯ್ಕೆಯಾಗಿದೆ ಎಂಬುದಾಗಿ ಯಾವುದೇ ಹಂತದಲ್ಲಿ ಕಂಡುಬಂದಲ್ಲಿ, ಸಂಬಂಧಪಟ್ಟವರ ವಿರುದ್ಧ ಸಂಬಂಧಿಸಿದ ಜಿಲ್ಲೆಗಳ ಜಿಲ್ಲಾಧಿಕಾರಿಗಳು / ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ಹಣಾಧಿಕಾರಿಗಳ ಮೂಲಕ ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ. |

(ಸಂಖ್ಯೆ : ವಇ 476 ಹೆಚ್ಎಂ 2021)

(ವಿ. ಸೋಮಣ್ಣ)

ವಸತಿ ಮತ್ತು ಮೂಲಸೌಲಭ್ಯ

ಅಭಿವೃದ್ಧಿ ಸಚಿವರು

ಅನುಬಂಧ

ಗ್ರಾಮೀಣ ವಸತಿ ಯೋಜನೆಗಳಡಿ ವಸತಿ ಸೌಕರ್ಯ ಪಡೆಯಲು ನಿಗದಿಪಡಿಸಿರುವ ಮಾನದಂಡಗಳು ಈ ಕೆಳಕಂಡಂತಿವೆ :-

- ಅರ್ಜಿದಾರರು ಕಡ್ಡಾಯವಾಗಿ ಮಹಿಳೆಯಾಗಿರಬೇಕು (ವಿವಾಹಿತ ಅಥವಾ ಏಕ ಮಹಿಳಾ ಒಡೆತನದ ಗೃಹಿಣಿ). ಮಾಜಿ ಯೋಧರು, ವಿಧುರರು, ಅಂಗವಿಕಲರು ಮತ್ತು ಹಿರಿಯ ನಾಗರೀಕರಾಗಿದ್ದಲ್ಲಿ, ಪುರುಷರು ಸಹಾ ಅರ್ಹರಾಗಿರುತ್ತಾರೆ.
- ಅರ್ಜಿದಾರರ ಕುಟುಂಬವು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದಿದ್ದು, ವಾರ್ಷಿಕ ಆದಾಯವು ಗ್ರಾಮೀಣ ಪ್ರದೇಶದವರಾಗಿದ್ದಲ್ಲಿ, ರೂ. 32,000/- ಗಳಿಗಿಂತ ಕಡಿಮೆ ಇರಬೇಕು ಹಾಗೂ ನಗರ ಪ್ರದೇಶದಲ್ಲಿ ರೂ. 87,600/- ಗಳ ಒಳಗಿರಬೇಕು.
- ಅರ್ಜಿದಾರರ ಕುಟುಂಬವು ವಸತಿರಹಿತರಾಗಿದ್ದು, ಅರ್ಜಿದಾರರು ಅಥವಾ ಕುಟುಂಬದ ಯಾವುದೇ ಸದಸ್ಯರ ಹೆಸರಿನಲ್ಲಿ ಕರ್ನಾಟಕದ ಯಾವುದೇ ಭಾಗದಲ್ಲಿ ಸ್ವಂತ ಮನೆಯನ್ನು ಹೊಂದಿರಬಾರದು. ಶಿಥಿಲಗೊಂಡ ಮನೆ ಅಥವಾ ಗುಡಿಸಲಿನಲ್ಲಿ ವಾಸಿಸುತ್ತಿರುವವರು ಅರ್ಹರಾಗಿರುತ್ತಾರೆ.
- ಅರ್ಜಿದಾರರು ಸ್ವಂತ ನಿವೇಶನ ಹೊಂದಿದ್ದು, ನಿವೇಶನಕ್ಕೆ ಸಂಬಂಧಿಸಿದಂತೆ ಖಾತೆ ಹೊಂದಿರಬೇಕು (ಪಾರಂಪರಿಕ ಅರಣ್ಯ ಹಕ್ಕುಗಳ ಕಾಯ್ದೆಯನ್ವಯ ಜಿಲ್ಲಾ ಸಮಿತಿಯಿಂದ ನೀಡಲಾದ ಹಕ್ಕುಪತ್ರ ಪಡೆದಿದ್ದಲ್ಲಿ, ವಸತಿ ಸೌಕರ್ಯ ಪಡೆಯಲು ಪರಿಗಣಿಸಬಹುದಾಗಿದೆ).
- ಬೇರೆ ಯಾವುದೇ ಯೋಜನೆ/ಇಲಾಖೆಯಿಂದ ಈಗಾಗಲೇ ವಸತಿ ಸೌಲಭ್ಯ ಪಡೆದಿರಬಾರದು.
- ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ)ಯಡಿ ವಸತಿ ಸೌಲಭ್ಯ ಪಡೆಯಲು ಕೇಂದ್ರ ಸರ್ಕಾರದಿಂದ ನೀಡಲಾದ ಸಾಮಾಜಿಕ, ಆರ್ಥಿಕ ಮತ್ತು ಜಾತಿ ಜನಗಣತಿ, 2011ರ ಪಟ್ಟಿಯಲ್ಲಿ ಹೆಸರು ಸೇರಿರಬೇಕು.
- ಡಾ|| ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆಯಡಿ ವಸತಿ ಸೌಲಭ್ಯ ಪಡೆಯಲು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿರಬೇಕು.

**ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಯಡಿ ಫಲಾನುಭವಿಗಳನ್ನು ಗುರುತಿಸುವ / ಆಯ್ಕೆ ಮಾಡುವ ಮಾನದಂಡಗಳು ಈ ಕೆಳಕಂಡಂತಿದೆ :-**

- ಫಲಾನುಭವಿಯು ಬೇಡಿಕೆ ಸಮೀಕ್ಷೆಯಲ್ಲಿರಬೇಕು.
- ದೇಶದಾದ್ಯಂತ ಅವನ / ಅವಳ ಹೆಸರಿನಲ್ಲಿ ಯಾವುದೇ ಮನೆ ಇರಬಾರದು.
- ವಾರ್ಷಿಕ ಆದಾಯವು ರೂ.3.00 ಲಕ್ಷಗಳ ಮಿತಿಯೊಳಗೆ ಇರಬೇಕು.
- ಇತರೇ ವಸತಿ ಯೋಜನೆಗಳಲ್ಲಿ ಈಗಾಗಲೇ ಸಹಾಯಧನ ಪಡೆದಿರಬಾರದು.
- ಫಲಾನುಭವಿಯು ಸ್ವಂತ ನಿವೇಶನ ಹೊಂದಿರಬೇಕು.